# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 209 |
| ಮಾನ್ಯ ಸದಸ್ಯರ ಹೆಸರು | ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 22.09.2020 |
| ಉತ್ತರಿಸುವ ಸಚಿವರು | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಆಹಾರ ಕಲಬೆರೆಕೆಯನ್ನು ತಡೆಗಟ್ಟುವ ನಿಟ್ಟಿನಲ್ಲಿ ಸರ್ಕಾರದಿಂದ ನಿಷೇಧಿಸಲ್ಪಟ್ಟ ರಾಸಾಯನಿಕ ಪದಾರ್ಥಗಳು ಯಾವುವು; ಅವುಗಳನ್ನು ಯಾವ ಯಾವ ಆಹಾರ ಪದಾರ್ಥಗಳಲ್ಲಿ ಬಳಸಲಾಗುತ್ತಿದೆ; ಸರ್ಕಾರದ ನಿಷೇಧದ ಹೊರತಾಗಿಯೂ ಆಹಾರ ತಯಾರಿಕೆಯಲ್ಲಿ ನಿಷೇಧಿಸಲ್ಪಟ್ಟ ರಾಸಾಯನಿಕಗಳನ್ನು ಬಳಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರದ ಕ್ರಮವೇನು; | Food Safety and Standards Regulations (Food Products Standards and Food Additives) chapter-3 ರಲ್ಲಿ ವಿವರಿಸಿರುವಂತೆ, Food Additives ಗಳನ್ನು ಆಹಾರದ category ಯಲ್ಲಿ ಅನುಮೋದಿತ ಪ್ರಮಾಣದಲ್ಲಿ ಮಾತ್ರ ಬಳಸಲು ಅನುಮತಿಸಲಾಗಿದೆ. ಅನುಮೋದಿತ ಪ್ರಮಾಣಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಬಳಸಿದರೆ ಅಥವಾ ಅನುಮೋದಿತ ವರ್ಗವಲ್ಲದ ಆಹಾರ ಪದಾರ್ಥಗಳಲ್ಲಿ (food category) ಉಪಯೋಗಿಸುವುದನ್ನು ನಿಷೇಧಿಸಿದೆ (ಮಾಹಿತಿಯನ್ನು **ಅನುಬಂಧ-01** ರಲ್ಲಿ ಲಗತ್ತಿಸಿದೆ)<br>ರಾಸಾಯನಿಕ ಪದಾರ್ಥಗಳನ್ನು ಸಿದ್ಧಪಡಿಸಿದ ಆಹಾರ ಪದಾರ್ಥಗಳಲ್ಲಿ ಉಪಯೋಗಿಸಲಾಗುತ್ತಿದೆ. ಉದಾಹರಣೆಗೆ; ಬೇಕರಿ ಉತ್ಪನ್ನಗಳು, ಬೀದಿ ಬದಿಯಲ್ಲಿ ಮಾರಾಟ ಮಾಡುವ ಆಹಾರ ಪದಾರ್ಥಗಳು, ಬಣ್ಣವಿರುವ ಆಹಾರ ಪದಾರ್ಥಗಳು (colour food).<br>ಆಹಾರ ತಯಾರಿಕೆಯಲ್ಲಿ ನಿಷೇಧಿಸಲ್ಪಟ್ಟ ರಾಸಾಯನಿಕಗಳನ್ನು ಬಳಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ರಾಸಾಯನಿಕ ಮಿಶ್ರಿತ ಆಹಾರ ಎಂದು ಅನುಮಾನ ಬಂದ ಆಹಾರ ಪದಾರ್ಥಗಳನ್ನು ಸಂಗ್ರಹಿಸಿ ಆಹಾರ ಪ್ರಯೋಗಾಲಯಕ್ಕೆ ಕಳುಹಿಸಿ ಅಸುರಕ್ಷಿತ ಎಂದು ವರದಿ ಬಂದ ನಂತರ ಆಹಾರ ಸುರಕ್ಷತಾ ಮತ್ತು ಗುಣಮಟ್ಟ ಕಾಯ್ದೆಯಡಿ ಕ್ರಮ ಕೈಗೊಳ್ಳಲಾಗುತ್ತಿದೆ. ಪ್ರಯೋಗಾಲಯಗಳ ವರದಿಯನ್ನು ಲಗತ್ತಿಸಿದೆ. **(ಅನುಬಂಧ-02)**<br>Food Safety Training & Certification (FOSTAC) ಮುಖಾಂತರ ಆಹಾರ ಉತ್ಪಾದಕರಿಗೆ Good Manufacturing Practices ರಡಿಯಲ್ಲಿ Food Additives ಉಪಯೋಗದ ಬಗ್ಗೆ ಅರಿವು ಮೂಡಿಸಲಾಗುತ್ತಿದೆ. |

| | | |
|---|---|---|
| ಆ | ಆಹಾರ ಕಲಬೆರಕೆಯನ್ನು ಪತ್ತೆಹಚ್ಚಲು ಯಾವ ಯಾವ ಜಿಲ್ಲೆಗಳಲ್ಲಿ ಪ್ರಯೋಗಾಲಯಗಳನ್ನು ಸ್ಥಾಪಿಸಲಾಗಿದೆ; ಕಳೆದ 3 ವರ್ಷಗಳಲ್ಲಿ ಈ ಪ್ರಯೋಗಾಲಯದಲ್ಲಿ ಪರೀಕ್ಷಿಸಲಾದ ಮತ್ತು ಪತ್ತೆ ಹಚ್ಚಲಾದ ಪ್ರಕರಣಗಳ ಸಂಖ್ಯೆ ಎಷ್ಟು; (ಪ್ರಯೋಗಾಲಯವಾರು, ತಿಂಗಳವಾರು ಮಾಹಿತಿ ನೀಡುವುದು) | ಆಹಾರ ಕಲಬೆರಕೆ ಪತ್ತೆಹಚ್ಚಲು ರಾಜ್ಯದಲ್ಲಿ 4 ಆಹಾರ ಪ್ರಯೋಗಾಲಯಗಳನ್ನು ಸ್ಥಾಪಿಸಲಾಗಿದೆ.<br>1. ರಾಜ್ಯ ಆಹಾರ ಪ್ರಯೋಗಾಲಯ, ಬೆಂಗಳೂರು.<br>2. ವಿಭಾಗೀಯ ಆಹಾರ ಪ್ರಯೋಗಾಲಯ, ಮೈಸೂರು.<br>3. ವಿಭಾಗೀಯ ಆಹಾರ ಪ್ರಯೋಗಾಲಯ, ಬೆಳಗಾವಿ.<br>4. ವಿಭಾಗೀಯ ಆಹಾರ ಪ್ರಯೋಗಾಲಯ, ಕಲಬುರ್ಗಿ.<br>ಮೇಲ್ಕಂಡ ಈ ಪ್ರಯೋಗಾಲಯಗಳಲ್ಲಿ ಕಳೆದ ಮೂರು ವರ್ಷಗಳಲ್ಲಿ ಪರೀಕ್ಷಿಸಲಾದ ಮತ್ತು ಪತ್ತೆಹಚ್ಚಲಾದ ಪ್ರಕರಣಗಳ ಸಂಖ್ಯೆಯನ್ನು (ಪ್ರಯೋಗಾಲಯವಾರು, ತಿಂಗಳುವಾರು) ಮಾಹಿತಿಯನ್ನು **ಅನುಬಂಧ-03** ರಲ್ಲಿ ಲಗತ್ತಿಸಲಾಗಿದೆ. |
| ಇ | ಹೋಟಲ್‌ಗಳಲ್ಲಿ ಮತ್ತು ಫಾಸ್ಟ್ ಫುಡ್ ತಯಾರಿಕಾ ಅಂಗಡಿಗಳಲ್ಲಿ ಅಜಿನೋಮೋಮೊ ಮತ್ತು ಬಣ್ಣತರಿಸುವ ರಾಸಾಯನಿಕಗಳ ಬಳಕೆಯಿಂದ ಜನ ಸಾಮಾನ್ಯರ ಆರೋಗ್ಯದ ಮೇಲೆ ಮಾದಕ ವಸ್ತುಗಳ ಸೇವನೆಯ ಪರಿಣಾಮಕ್ಕಿಂತಲೂ ಹೆಚ್ಚು ದುಷ್ಪರಿಣಾಮ ಬೀರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಆಹಾರ ಕಲಬೆರಕೆಯನ್ನು ತಡೆಗಟ್ಟಲು ಜಿಲ್ಲೆಗೊಂದರಂತೆ ಪ್ರಯೋಗಾಲಯ ಸ್ಥಾಪಿಸುವ ಉದ್ದೇಶವನ್ನು ಸರ್ಕಾರ ಹೊಂದಿದೆಯೇ? (ಮಾಹಿತಿಯನ್ನು ಒದಗಿಸುವುದು) | ಬಂದಿದೆ.<br>ಈ ಹಿಂದೆ ತಯಾರಿಸಿದ ಅಡುಗೆ ಪದಾರ್ಥಗಳನ್ನು (prepared food) ವಿಶ್ಲೇಷಣೆ ಮಾಡಲು ಶೀತಲ ಸರಪಣಿ ವ್ಯವಸ್ಥೆ ಇಲ್ಲದಿರುವುದರಿಂದ ಇದುವರೆಗೂ ಕ್ರಮ ಕೈಗೊಂಡಿರುವುದಿಲ್ಲ. ಪ್ರಸ್ತುತ ಶೀತಲ ಸರಪಣಿ ವ್ಯವಸ್ಥೆ ಇರುವುದರಿಂದ ಅಕ್ಟೋಬರ್ 2020 ರಲ್ಲಿ ಒಂದು ವಿಶೇಷ ಆಂದೋಲನವನ್ನು ಹಮ್ಮಿಕೊಳ್ಳಲು ಕ್ರಮಕೈಗೊಳ್ಳಲಾಗಿದೆ.<br>ಪ್ರಸ್ತುತ ರಾಜ್ಯದಲ್ಲಿ 1 ರಾಜ್ಯ ಆಹಾರ ಪ್ರಯೋಗಾಲಯ ಹಾಗೂ 3 ವಿಭಾಗೀಯ ಆಹಾರ ಪ್ರಯೋಗಾಲಯಗಳಲ್ಲಿ ಆಹಾರ ಮಾದರಿಗಳನ್ನು ವಿಶ್ಲೇಷಣೆ ಮಾಡಲಾಗುತ್ತಿದೆ.<br>ಹಾಲಿ ಕಾರ್ಯಾಚರಣೆಯಲ್ಲಿ ಇರುವ ಪ್ರಯೋಗಾಲಯಗಳನ್ನು NABL ಅಂಗೀಕೃತ ಪ್ರಯೋಗಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಕ್ರಮಕೈಗೊಳ್ಳಲಾಗುತ್ತಿದೆ. |

**ಆಕುಕ 93 ಎಸ್‌ಬಿವಿ 2020**

(ಬಿ. ಶ್ರೀರಾಮುಲು)

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು